ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಗುರುವಾರ, ದಿನಾಂಕ: 4ನೇ ಫೆಬ್ರುವರಿ, 2021

ಭ್ರಷ್ಟಾಚಾರ, ಅಕ್ರಮ ಅವ್ಯವಹಾರಗಳಲ್ಲಿ ಬಾಗಿಯಾಗಿರುವ I.A.S., I.P.S.,ಗಳ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು):-

381 (431) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಭ್ರಷ್ಟಾಚಾರ, ಅಕ್ರಮ ಅವ್ಯವಹಾರಗಳಲ್ಲಿ ಭಾಗಿಯಾಗಿರುವ ಐ.ಎ.ಎಸ್., ಐ.ಪಿ.ಎಸ್., ಅಧಿಕಾರಿಗಳನ್ನು ಸರ್ಕಾರದ ಆಯಕಟ್ಟಿನ ಪ್ರಮುಖ ಸ್ಥಳಗಳಲ್ಲಿ ನಿಯುಕ್ತಿಗೊಳಿಸುವುದರಿಂದ ಸರ್ಕಾರದ ಘನತೆ, ಗೌರವ ಮತ್ತು ರಾಜ್ಯದ ಜನತೆ ಸರ್ಕಾರದ ಮೇಲೆ ಇಟ್ಟಿರುವ ವಿಶ್ವಾಸಕ್ಕೆ ಕುಂದುಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಐ.ಎಂ.ಎ., ಹಗರಣದಲ್ಲಿ ನೇರವಾಗಿ ಭಾಗಿಯಾಗಿರುವ ಕುರಿತು ಸಿ.ಬಿ.ಐ., ನಿಂದ ಕೋರ್ಟ್‌ಗೆ ಆರೋಪ ಪಟ್ಟಿ ಸಲ್ಲಿಕೆಯಾಗಿರುವ ಐ.ಎ.ಎಸ್., ಐ.ಪಿ.ಎಸ್., ಅಧಿಕಾರಿಗಳ ಮೇಲೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; ಸದರಿ ಅಧಿಕಾರಿಗಳನ್ನು ಆಯಕಟ್ಟಿನ ಜಾಗಕ್ಕೆ ನೇಮಿಸಲು ಕಾರಣಗಳೇನು; ಇದರಿಂದ ಐ.ಎಂ.ಎ., ಹಗರಣದ ತನಿಖೆ ಮತ್ತು ಸಾಕ್ಷಿಗಳ ಮೇಲೆ ವ್ಯತಿರಿಕ್ತ ಪರಿಣಾಮ ಬೀರುವುದಿಲ್ಲವೆ; ಈ ಕುರಿತು ಸರ್ಕಾರದ ನಿಲುವೇನು;

(ಇ) ಐ.ಎಂ.ಎ., ಹಗರಣದಲ್ಲಿ ನೇರವಾಗಿ ಭಾಗಿಯಾಗಿರುವ ಕುರಿತು ಸಿ.ಬಿ.ಐ., ನಿಂದ ಕೋರ್ಟ್ ಆರೋಪ ಪಟ್ಟಿ ಸಲ್ಲಿಕೆಯಾಗಿರುವ ಐ.ಎ.ಎಸ್., ಐ.ಪಿ.ಎಸ್., ಅಧಿಕಾರಿಗಳನ್ನು ಅಮಾನತ್ತುಗೊಳಿಸದಿರುಲು ಕಾರಣವೇನು; ಯಾವಾಗ ಅಮಾನತ್ತುಗೊಳಿಸಲಾಗುವುದು;

(ಈ) ಐ.ಎಂ.ಎ., ಹಗರಣದಲ್ಲಿ ಭಾಗಿಯಾಗಿರುವ ಮತ್ತು ಯಾವುದೇ ನಿರ್ಧಾರ ಮತ್ತು ಶಿಫಾರಸ್ಸುಗಳನ್ನು ಮಾಡಲು ಅಧಿಕಾರ ಹೊಂದಿರದ ಸರ್ಕಾರದ ಕೆಳ ಹಂತದ ಅಧಿಕಾರಿ ಮತ್ತು ಸಿಬ್ಬಂದಿಗಳನ್ನು ಅಮಾನತ್ತು ಮಾಡಿ ಇಲಾಖಾ ವಿಚಾರಣೆಗೆ ಒಳಪಡಿಸಲು ಆದೇಶಿಸಿದ ಸರ್ಕಾರ ಐ.ಪಿ.ಎಸ್., ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳಲು ಹಿಂಜರಿಯುತ್ತಿರುವುದು ಏಕೆ; ಈ ಕುರಿತು ಸರ್ಕಾರದ ನಿಲುವೇನು ?